# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1064 |
| ಸದಸ್ಯರ ಹೆಸರು | ಶ್ರೀ ಪಿ ಆರ್ ರಮೇಶ್ |
| ಉತ್ತರಿಸುವ ದಿನಾಂಕ | 22-12-2021 |
| ಉತ್ತರಿಸುವವರು | ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 5 ವರ್ಷಗಳಿಂದ ರಾಜ್ಯದ ಮುಜರಾಯಿ ಇಲಾಖೆಯಿಂದ ಹಿಂದುಯೇತರ ಧರ್ಮಗಳ ಸಂಸ್ಥೆಗಳಿಗೆ/ವ್ಯಕ್ತಿಗಳಿಗೆ/ಇಲಾಖೆಗಳಿಗೆ ಯಾವುದಾದರೂ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆಯೇ: (ವಿವರ ನೀಡುವುದು) | ರಾಜ್ಯದ ಮುಜರಾಯಿ ಇಲಾಖೆಯಿಂದ ಈ ಕೆಳಕಂಡ ಯೋಜನೆಯಡಿ ಪ್ರತ್ಯೇಕ ಮಾರ್ಗಸೂಚಿಗಳನ್ವಯ ಅನುದಾನ ಬಿಡುಗಡೆ ಮಾಡಲಾಗುತ್ತಿದೆ. ಕೆಳಕಂಡ ಆರಾಧನಾ ಯೋಜನೆಯಡಿಯಲ್ಲಿ ಮಾತ್ರ ಸರ್ಕಾರದ ಮಾರ್ಗಸೂಚಿಯನ್ವಯ ಹಿಂದೂಯೇತರ ಧಾರ್ಮಿಕ ಸಂಸ್ಥೆಗಳಿಗೆ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. ವಿವರ ಅನುಬಂಧ-1ರಲ್ಲಿ ಒದಗಿಸಿದೆ |

| ಯೋಜನೆ | ಷರಾ |
|---|---|
| ದುರಸ್ಥಿ/ಜೀರ್ಣೋದ್ಧಾರ/ ನಿರ್ಮಾಣ | ಧಾರ್ಮಿಕ ದತ್ತಿ ಇಲಾಖಾ ವ್ಯಾಪ್ತಿಗೆ ಒಳಪಟ್ಟ ಅಧಿಸೂಚಿತ ಸಂಸ್ಥೆಗಳು (ದೇವಾಲಯಗಳು) /ಖಾಸಗಿ ಧಾರ್ಮಿಕ ಸಂಸ್ಥೆಗಳು (ಖಾಸಗಿ ದೇವಾಲಯಗಳು)/ಮಠಗಳು |
| ಆರಾಧನಾ ಯೋಜನೆ | ಈ ಯೋಜನೆಯಡಿ ಸರ್ಕಾರದ ಆದೇಶ ಸಂ:ಕಂಇ 321/ಮುಅಬಿ 93 ಬೆಂಗಳೂರು ದಿನಾಂಕ:07.08.1993 ರ ಆದೇಶದಲ್ಲಿ ಆರಾಧನಾ ಯೋಜನೆಯನ್ನು ಅಲ್ಪಸಂಖ್ಯಾತ ಕೋಮುಗಳಾದ ಮುಸ್ಲಿಂ, ಕ್ರಿಶ್ಚಿಯನ್, ಸಿಖ್, ಜೈನ, ಬೌದ್ಧ, ಪಾರ್ಸಿ, ಆಂಗ್ಲೋ, ಇಂಡಿಯನ್ ರವರು ವಾಸಿಸುವ ಸ್ಥಳಗಳಲ್ಲಿ ದೇವಾಲಯಗಳ, ಚರ್ಚ್‌ಗಳ ಗುರುದ್ವಾರಗಳ, ಮಸೀದಿಗಳ, ಪ್ರಾರ್ಥನಾ ಮಂದಿರಗಳ, ಕಲ್ಯಾಣ ಮಂಟಪಗಳ, ಸಮುದಾಯ ಕೇಂದ್ರ, ಸಮುದಾಯ ಭವನ ನಿರ್ಮಾಣ, ದುರಸ್ಥಿ ಹಾಗೂ ಆಧುನೀಕರಣಗಳಿಗೆ ನೀಡಲಾಗುವುದು. |
| ಪರಿಶಿಷ್ಟ ಜಾತಿ ಉಪಯೋಜನೆ<br>ಗಿರಿಜನ ಉಪ ಯೋಜನೆ | ಈ ಯೋಜನೆಗಳಡಿ ಸರ್ಕಾರದ ಆದೇಶ ಸಂಖ್ಯೆ:ಕಂಇ 189 ಮುಅಬಿ 2011 ಬೆಂಗಳೂರು ದಿನಾಂಕ:19.09.2011ರ ಆದೇಶದಲ್ಲಿ ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಗಳಡಿ ಪರಿಶಿಷ್ಟ ಜಾತಿ ಹಾಗೂ ಗಿರಿಜನ /ಪರಿಶಿಷ್ಟ ಪಂಗಡದವರು ವಾಸಿಸುವ ಸ್ಥಳಗಳಲ್ಲಿ ಅಥವಾ ಸದರಿ ಸಮುದಾಯದವರು ವಾಸಿಸುವ ಸ್ಥಳಕ್ಕೆ ಸಮೀಪ ನಿವೇಶನಗಳನ್ನು ಗುರುತಿಸಿ ಅಲ್ಲಿ ಅವರಿಗಾಗಿ ದೇವಾಲಯ, ಪ್ರಾರ್ಥನಾ ಮಂದಿರ ಅಥವಾ ಕಲ್ಯಾಣ ಮಂಟಪ/ಸಮುದಾಯ ಭವನವನ್ನು ನಿರ್ಮಿಸಲು ಅಥವಾ ಅವುಗಳ ಜೀರ್ಣೋದ್ಧಾರಕ್ಕಾಗಿ ಅನುದಾಣ ಬಿಡುಗಡೆ ಮಾಡಲಾಗುವುದು. |
| ತಸ್ತಿಕ್ | ಇನಾಂ ರದ್ಧಿಯಾತಿ ಕಾಯ್ದೆ 1955 ಹಾಗೂ ಕರ್ನಾಟಕ ಹಲವು ರದ್ಧಿಯಾತಿ ಕಾಯ್ದೆ 1977 ರನ್ವಯ ಇನಾಂ ಜಮೀನುಗಳನ್ನು ಕಳೆದುಕೊಂಡ ಅರ್ಹ ಧಾರ್ಮಿಕ ಸಂಸ್ಥೆಗಳಿಗೆ ಭೂ ಪರಿಹಾರಾರ್ಥವಾಗಿ ಪ್ರತಿ ಆರ್ಥಿಕ ವರ್ಷಗಳಲ್ಲಿ ಮಂಜೂರು ಮಾಡಲಾಗುತ್ತಿರುತ್ತದೆ. |
| ವರ್ಷಾಸನ | ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ರನ್ವಯ ಇನಾಂಯೇತರ ಜಮೀನುಗಳನ್ನು ಕಳೆದುಕೊಂಡ ಅರ್ಹ ಧಾರ್ಮಿಕ ಸಂಸ್ಥೆಗಳಿಗೆ ಭೂ ಪರಿಹಾರಾರ್ಥವಾಗಿ ಪ್ರತಿ ಆರ್ಥಿಕ ವರ್ಷಗಳಲ್ಲಿ ಮಂಜೂರು ಮಾಡಲಾಗುತ್ತಿರುತ್ತದೆ. |

....2

| | | |
|---|---|---|
| ಆ) | ಬಿಡುಗಡೆ ಮಾಡಿದಲ್ಲಿ ಒಟ್ಟು ಎಷ್ಟು ಮೊತ್ತದ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ? (ಸಂಪೂರ್ಣ ವಿವರ ನೀಡುವುದು) | ಆರಾಧನಾ ಯೋಜನೆಯ ಮಾರ್ಗಸೂಚಿಯನ್ವಯ ಹಿಂದೂಯೇತರ ಧರ್ಮಗಳ ಸಂಸ್ಥೆಗಳಿಗೆ ಅನುದಾನ ಬಿಡುಗಡೆ ಮಾಡಲು ಅವಕಾಶ ಕಲ್ಪಿಸಲಾಗಿದ್ದು, ಅದರನ್ವಯ ಸರ್ಕಾರದಿಂದ ವಿಧಾನ ಸಭಾ ಕ್ಷೇತ್ರವಾರು ಮಂಜೂರಾಗಿ ಬಿಡುಗಡೆಯಾದ ಅನುದಾನದಲ್ಲಿ ಆರಾಧನಾ ಸಮಿತಿಯ ಆಯ್ಕೆಯಂತೆ ಮೂರು ಜಿಲ್ಲೆಗಳಲ್ಲಿ ಒಟ್ಟು **ರೂ.12.10.740.00/-**ಗಳ ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. ಜಿಲ್ಲಾವಾರು/ ವರ್ಷವಾರು/ಸಂಸ್ಥೆವಾರುವ ವಿವರವನ್ನು ಅನುಬಂಧ-1ರಲ್ಲಿ ಒದಗಿಸಿದೆ.<br><br>ತಸ್ತೀಕ್ ಮತ್ತು ವರ್ಷಾಸನ ಯೋಜನೆಗಳಡಿ ಕ್ರಮವಾಗಿ ಇನಾಂ ರದ್ದಿಯಾತಿ ಕಾಯ್ದೆ 1955 ಹಾಗೂ ಕರ್ನಾಟಕ ಹಲವು ರದ್ದಿಯಾತಿ ಕಾಯ್ದೆ 1977 ರನ್ವಯ ಮತ್ತು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ರನ್ವಯ ಇನಾಂ /ಇನಾಂಯೇತರ ಜಮೀನುಗಳನ್ನು ಕಳೆದುಕೊಂಡ ಧಾರ್ಮಿಕ ಸಂಸ್ಥೆಗಳಿಗೆ ಸರ್ಕಾರದಿಂದ ಮಂಜೂರಾಗಿ ಬಿಡುಗಡೆಯಾದ ಅನುದಾನದಂತೆ ಪರಿಹಾರ ಧನವನ್ನು ಪಾವತಿ ಮಾಡಲಾಗುತ್ತಿತ್ತು. ಸದರಿ ಯೋಜನೆಯಡಿ ಕಳೆದ 5 ವರ್ಷಗಳಿಂದ **ರೂ.12.10.740.00/-ಗಳ** ಅನುದಾನವನ್ನು ಬಿಡುಗಡೆ ಮಾಡಲಾಗಿರುತ್ತದೆ. ವಿವರಗಳನ್ನು ಅನುಬಂಧ-2ರಲ್ಲಿ ಒದಗಿಸಿದೆ.<br><br>ಆದರೆ, ಸರ್ಕಾರದ ಆದೇಶ ಸಂಖ್ಯೆ: ಕಂಇ 04 ಮುತಬ 2021 ಬೆಂಗಳೂರು ದಿನಾಂಕ:23.07.2021 ರನ್ವಯ **757** ಹಿಂದುಯೇತರ ಧಾರ್ಮಿಕ ಸಂಸ್ಥೆಗಳನ್ನು ತಸ್ತೀಕ್ ಅನುದಾನದಿಂದ ಹಾಗೂ **87** ಹಿಂದುಯೇತರ ಧಾರ್ಮಿಕ ಸಂಸ್ಥೆಗಳನ್ನು ಧಾರ್ಮಿಕ ದತ್ತಿ ಇಲಾಖೆಯಿಂದ ಹೊರತುಪಡಿಸಿ ಆದೇಶಿಸಿದ್ದು, ಅದರನ್ವಯ ಸದರಿ ಹಿಂದುಯೇತರ ಧಾರ್ಮಿಕ ಸಂಸ್ಥೆಗಳಿಗೆ ಸಂಬಂಧಪಟ್ಟ ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ಔಕಾಫ್ (ವಕ್ಫ್) ಇಲಾಖೆಯ ಮುಖಾಂತರ ಸದರಿ ಸಂಸ್ಥೆಗಳಿಗೆ ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದೆ. |
| ಇ) | ಅನುದಾನ ಬಿಡುಗಡೆಯ ಸರ್ಕಾರದ ಆದೇಶವನ್ನು ಒದಗಿಸುವುದು? | ಆರಾಧನಾ ಯೋಜನೆಯ ಮಾರ್ಗಸೂಚಿ ಸರ್ಕಾರದ ಆದೇಶ ಸಂಖ್ಯೆ:ಕಂಇ 189 ಮುಅಬಿ 2011 ಬೆಂಗಳೂರು ದಿನಾಂಕ:19.09.2011 ಅನ್ನು ಲಗತ್ತಿಸಿದೆ.<br><br>ತಸ್ತೀಕ್ ಮತ್ತು ವರ್ಷಾಸನ ಯೋಜನೆಗಳಡಿ ಕ್ರಮವಾಗಿ ಇನಾಂ ರದ್ದಿಯಾತಿ ಕಾಯ್ದೆ 1955 ಹಾಗೂ ಕರ್ನಾಟಕ ಹಲವು ರದ್ದಿಯಾತಿ ಕಾಯ್ದೆ 1977 ರನ್ವಯ ಮತ್ತು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961 ರನ್ವಯ ಮಂಜೂರಾಗುತ್ತಿತ್ತು. ಪ್ರಸ್ತುತ ರದ್ದುಪಡಿಸಿರುವ ಸರ್ಕಾರದ ಆದೇಶ ಸಂ:ಕಂಇ 04 ಮುತಬ 2021 ಬೆಂಗಳೂರು ದಿನಾಂಕ: 23.07.2021ವನ್ನು ಲಗತ್ತಿಸಿದೆ. |

ಸಂಖ್ಯೆ: ಕಂಇ 270 ಮುಸಪ್ರ 2021

**(ಶಶಿಕಲಾ. ಅ. ಜೊಲ್ಲೆ)**

**ಮುಜರಾಯಿ, ಹಜ್ ಹಾಗೂ ವಕ್ಫ್ ಸಚಿವರು**

## ಅನುಬಂಧ-1

| ಕ್ರ. ಸಂ | ವರ್ಷ | ವಿಧಾನ ಸಭಾ ಕ್ಷೇತ್ರ | ಸಂಸ್ಥೆಯ ಹೆಸರು | ಬಿಡುಗಡೆ ಮಾಡಿದ ಮೊತ್ತ |
|---|---|---|---|---|
| **ದಕ್ಷಿಣ ಕನ್ನಡ ಜಿಲ್ಲೆ** | | | | |
| 1. | 2017-18 | ಬೆಳ್ತಂಗಡಿ | ಬದ್ರಿಯ ಜುಮ್ಮಾ ಮಸೀದಿ, ಪುಂಜಾಲ್ ಕಟ್ಟೆ ಕುಕ್ಕಳ ಬೆಳ್ತಂಗಡಿ ತಾಲ್ಲೂಕು | 50.000 |
| 2. | | ಮೂಡಬಿದ್ರೆ | ಬದ್ರಿಯ ಜುಮ್ಮಾ ಮಸೀದಿ, ತೆಂಕಕಾರಂದೂರು | 89.285 |
| 3. | | ಮಂಗಳೂರು ದಕ್ಷಿಣ | ಸೈಂಟ್ ಅಂಥೋಣಿ ಚರ್ಚ್, ಕೂಳೂರು ಮಂಗಳೂರು ತಾಲ್ಲೂಕು | 60.000 |
| 4. | | | ವಾರ್ಡ್ ನಂಬ್ರ 5 ಚೊಕ್ಕಬೆಟ್ಟು 8ನೇ ಬ್ಲಾಕ್ ಮಸೀದಿ ಮಂಗಳೂರು ತಾಲ್ಲೂಕು | 29.285 |
| 5. | | ಮಂಗಳೂರು | ಮುಹಿಯುದ್ದೀನ್ ಜುಮ್ಮಾ ಮಸೀದಿ, ಅಂಗರಗುಡಿ, ಮಂಗಳೂರು ತಾಲ್ಲೂಕು. | 89.285 |
| 6. | | ಬಂಟ್ವಾಳ | ಜುಮ್ಮಾ ಮಸೀದಿ ಉಳಿ, ಬಂಟ್ವಾಳ ತಾಲ್ಲೂಕು | 30,000 |
| 7. | | | ಮೊಹಿಯುದ್ದೀನ್ ಜುಮ್ಮಾ ಮಸೀದಿ ಲಾವ:ಪಡೂರು ಬಂಟ್ವಾಳ ತಾಲ್ಲೂಕು. | 30,000 |
| 8. | | | ಅವರ್ ಲೇಟಿ ಆಫ್ ಲೊರೆಟ್ಟೋ ಚರ್ಚ್, ಅಮ್ಟಾಡಿ ಬಂಟ್ವಾಳ ತಾಲ್ಲೂಕು. | 29,285 |
| 9. | | | ಮೊಹಿಯುದ್ದೀನ್ ಜುಮ್ಮಾ ಮಸ್ಜಿದ್ ಮಲಾಯಿಬೆಟ್ಟು ಸಜೀಪ ಮುನ್ನೂರು ಬಂಟ್ವಾಳ ತಾಲ್ಲೂಕು. | 50,000 |
| 10. | | | ಜುಮ್ಮಾ ಮಸೀದಿ ಉಳಿ, ಬಂಟ್ವಾಳ ತಾಲ್ಲೂಕು. | 30,000 |
| 11. | | | ಮೊಹಿಯುದ್ದೀನ್ ಜುಮ್ಮಾ ಮಸೀದಿ ಕಾವಳಪಡೂರು, ಬಂಟ್ವಾಳ ತಾಲ್ಲೂಕು | 30,000 |
| 12. | 2018-19 | ಮಂಗಳೂರು | ತಾಹ್ವ ಜುಮಾ ಮಸೀದಿ ರವುಲತ್ತುಲ್ ಉಲುಂ ಮದರಸ್ ನ್ಯೂಪಡ್ಪು ಹರೇಕಳ, ಮಂಗಳೂರು. | 1,50.000 |
| 13. | 2019-20 | | ರೌಲತ್ತಯಲ್ ಇಸ್ಲಾಂ ಮದರಸ ಕಮಿಟಿ, ಎಲ್ಯಾರ್ ಪದವು ಅಂಬ್ಲಮೊಗರು, ಮಂಗಳೂರು ತಾಲ್ಲೂಕು | 1,06,000 |
| 14. | 2021-21 | | ಮಲ್ಲಿಕುದಿನಾರ್ ಮಸೀದಿ ಗರೋಡಿ, ಅಡ್ಡೂರು, ಮಂಗಳೂರು ತಾಲ್ಲೂಕು | 80,000 |
| **ಕಲಬುರಗಿ ಜಿಲ್ಲೆ** | | | | |
| 15. | 2020-21 | ಚಿಂಚೋಳಿ ತಾಲ್ಲೂಕು | ಶ್ರೀ ಮೈಬೂಬಸೂಬಾನಿ ದರ್ಗಾ, ಐನಾಪೂರ ಗ್ರಾಮ, ಚಿಂಚೋಳಿ ತಾಲ್ಲೂಕು | 3,30,000 |
| **ಶಿವಮೊಗ್ಗ ಜಿಲ್ಲೆ** | | | | |
| 16. | 2017-18 | ತೀರ್ಥಹಳ್ಳಿ ತಾಲ್ಲೂಕು | ಅಶೂರ್ ಖಾನ್ ಕಮಿಟಿ (ಮೊಹರಂ) ಸಕ್ಕರೆ ಬೈಲು, ಗಾಜನೂರು ದರ್ಗಾ, | 27,600 |
| | | | ಒಟ್ಟು ರೂ | **12,10,740.00** |

## ಅನುಬಂಧ-2

### ತಸ್ತೀಕ್

| ವರ್ಷ | ಸಂಸ್ಥೆಗಳು | ಮಂಜೂರು ಮಾಡಿದ ಮೊತ್ತ | ಒಟ್ಟು ಮೊತ್ತ |
|---|---|---|---|
| 2016-17 | 757 | 48,000.00 (ಪ್ರತಿ ಸಂಸ್ಥೆಗೆ) | 3,63,36,000.00 |
| 2017-18 | 757 | 48,000.00 (ಪ್ರತಿ ಸಂಸ್ಥೆಗೆ) | 3,63,36,000.00 |
| 2018-19 | 757 | 48,000.00 (ಪ್ರತಿ ಸಂಸ್ಥೆಗೆ) | 3,63,36,000.00 |
| 2019-20 | 757 | 48,000.00 (ಪ್ರತಿ ಸಂಸ್ಥೆಗೆ) | 3,63,36,000.00 |
| 2020-21 | 757 | 48,000.00 (ಪ್ರತಿ ಸಂಸ್ಥೆಗೆ) | 3,63,36,000.00 |
| 2021-22 | 757 | 12,000.00 (ಪ್ರತಿ ಸಂಸ್ಥೆಗೆ) | 90,84,000.00 |
| | | ಮಹಾ ಒಟ್ಟು | **1,90,764,000.00** |

**ಷರಾ :- 2021-22 ನೇ ಸಾಲಿನಲ್ಲಿ ರೂ.12,000/-ಗಳನ್ನು ಬಿಡುಗಡೆ ಮಾಡಲಾಗಿದ್ದು, ತದನಂತರ ಸರ್ಕಾರದ ಆದೇಶದಂತೆ ಹಿಂದುಯೇತರ ಧಾರ್ಮಿಕ ಸಂಸ್ಥೆಗಳನ್ನು ಧಾರ್ಮಿಕ ದತ್ತಿ ಇಲಾಖೆಯಿಂದ ಹೊರತುಪಡಿಸಲಾಗಿರುತ್ತದೆ.**

### ವರ್ಷಾಸನ

| ವರ್ಷ | ಸಂಸ್ಥೆಗಳು | ಮಂಜೂರು ಮಾಡಿದ ಮೊತ್ತ | ಒಟ್ಟು ಮೊತ್ತ |
|---|---|---|---|
| 2016-17 | 87 | 48,000.00 (ಪ್ರತಿ ಸಂಸ್ಥೆಗೆ) | 41,76,000.00 |
| 2017-18 | 87 | 48,000.00 (ಪ್ರತಿ ಸಂಸ್ಥೆಗೆ) | 41,76,000.00 |
| 2018-19 | 87 | 48,000.00 (ಪ್ರತಿ ಸಂಸ್ಥೆಗೆ) | 41,76,000.00 |
| 2019-20 | 87 | 48,000.00 (ಪ್ರತಿ ಸಂಸ್ಥೆಗೆ) | 41,76,000.00 |
| 2020-21 | 87 | 48,000.00 (ಪ್ರತಿ ಸಂಸ್ಥೆಗೆ) | 41,76,000.00 |
| 2021-22 | 87 | 12,000.00 (ಪ್ರತಿ ಸಂಸ್ಥೆಗೆ) | 10,44,000.00 |
| | | ಮಹಾ ಒಟ್ಟು | **2,19,24,000.00** |

**ಷರಾ :- 2021-22 ನೇ ಸಾಲಿನಲ್ಲಿ ರೂ.12,000/-ಗಳನ್ನು ಬಿಡುಗಡೆ ಮಾಡಲಾಗಿದ್ದು, ತದನಂತರ ಸರ್ಕಾರದ ಆದೇಶದಂತೆ ಹಿಂದುಯೇತರ ಧಾರ್ಮಿಕ ಸಂಸ್ಥೆಗಳನ್ನು ಧಾರ್ಮಿಕ ದತ್ತಿ ಇಲಾಖೆಯಿಂದ ಹೊರತುಪಡಿಸಲಾಗಿರುತ್ತದೆ.**